# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1230 |
| ಉತ್ತರಿಸುವ ದಿನಾಂಕ | 17-3-2021 |
| ಮಾನ್ಯ ಸದಸ್ಯರ ಹೆಸರು | ಶ್ರೀಮತಿ ಭಾರತಿ ಶೆಟ್ಟಿ |
| ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಜಿಲ್ಲಾಧಿಕಾರಿಗಳ ಗ್ರಾಮ ವಾಸ್ತವ್ಯದಿಂದ ಹೊರ ಹೊಮ್ಮಿರುವ ಅಂಶಗಳೇನು : | ಜಿಲ್ಲಾಧಿಕಾರಿಗಳ ಗ್ರಾಮ ವಾಸ್ತವ್ಯದಿಂದ ಜನರ ಸಮಸ್ಯೆಗಳನ್ನು ಸ್ಥಳದಲ್ಲಿಯೇ ಪರಿಹರಿಸಲು ಕ್ರಮ ಕೈಗೊಳ್ಳುವ ವ್ಯವಸ್ಥೆಯಾಗಿದೆ. ಇದರಿಂದ ಕಂದಾಯ ಇಲಾಖೆಗೆ ಸಂಬಂಧಿಸಿದಂತೆ ಗ್ರಾಮಸ್ಥರಿಗೆ ಸಿಗುವ ಸೌಲಭ್ಯಗಳ ಕುರಿತು ತಿಳುವಳಿಕೆಯನ್ನು ನೀಡಿ, ಸಾರ್ವಜನಿಕರು ಹಾಗೂ ಬಡ ಕುಟುಂಬಗಳ ರೈತರುಗಳಿಗೆ ಸ್ಥಳದಲ್ಲಿಯೇ ಅಗತ್ಯ ಮಾಹಿತಿ ಮತ್ತು ದಾಖಲಾತಿಗಳನ್ನು ಪಡೆದು ಬಗೆಹರಿಸಲು ಕ್ರಮಕೈಗೊಳ್ಳುವ ವ್ಯವಸ್ಥೆ ಮಾಡಲಾಯಿತು. ಗ್ರಾಮಗಳಿಗೆ ಭೇಟಿ ಮಾಡಿ ವಾಸ್ತವ್ಯ ಹೂಡುವುದರಿಂದ ಗ್ರಾಮಗಳ ಮೂಲಭೂತ ಸಮಸ್ಯೆಗಳ ಬಗ್ಗೆ, ಸಾರ್ವಜನಿಕರಿಗೆ ಸರ್ಕಾರದಿಂದ ದೊರಕಬಹುದಾದ ಸೌಲಭ್ಯಗಳ ಬಗ್ಗೆ ಅರಿವು ಮೂಡಿಸಲು ಸಹಕಾರಿಯಾಗಿರುತ್ತದೆ. ಕಂದಾಯ ಇಲಾಖೆಯ ಸೇವೆಗಳಾದ ಜಾತಿ ಮತ್ತು ಆದಾಯ ಪ್ರಮಾಣ ಪತ್ರಗಳು, ಪಹಣಿಯ ಲೋಪದೋಷಗಳನ್ನು ಸರಿಪಡಿಸುವುದು, ಪೌತಿ ಖಾತೆ ಬದಲಾವಣೆ, ಅರ್ಹರಿಗೆ ವಿವಿಧ ರೀತಿಯ ಪಿಂಚಣಿ ಸೌಲಭ್ಯ ಮಂಜೂರು, ಆಶ್ರಯ ಯೋಜನೆಗೆ ಜಮೀನು ಕಾಯ್ದಿರಿಸುವುದು, ಮತದಾರರ ಪಟ್ಟಿಯಲ್ಲಿ ಹೆಸರು ಸೇರ್ಪಡೆ, ಸ್ಮಶಾನದ ಅವಶ್ಯಕತೆಯ ಬಗ್ಗೆ ಪರಿಶೀಲನೆ ಹಾಗೂ ಇತರ ಇಲಾಖೆಯ ಸೇವೆಗಳಾದ ಅರ್ಹರಿಗೆ ಬಿಪಿಎಲ್ ಪಡಿತರ ಚೀಟಿ ವಿತರಣೆ, ಸರ್ಕಾರಿ ವಸತಿ ನಿಲಯಗಳ ಪರಿಶೀಲನೆ, ಅಂಗನವಾಡಿ ಹಾಗೂ ಶಾಲೆಗಳಿಗೆ ಭೇಟಿ, ಆಧಾರ್ ಕಾರ್ಡ್ ವಿತರಣೆ ಮುಂತಾದ ಸೇವೆಗಳನ್ನು ಗ್ರಾಮ ಮಟ್ಟದಲ್ಲಿಯೇ ಒದಗಿಸುವುದರಿಂದ ಸಾರ್ವಜನಿಕರಿಗೆ ಅನುಕೂಲವಾಗುತ್ತದೆ. ಸಾರ್ವಜನಿಕ ಕುಂದು ಕೊರತೆಗಳು ವಿಶೇಷವಾಗಿ ಕಂದಾಯ ಇಲಾಖೆಯ ಸಮಸ್ಯೆಗಳನ್ನು ನಿವಾರಣೆ ಮಾಡಲು ಕ್ರಮಕೈಗೊಳ್ಳಬಹುದು ಹಾಗೂ ಸ್ಥಳೀಯ ಸಮಸ್ಯೆಗಳ ಕುರಿತು ತಿಳಿದುಕೊಳ್ಳಬಹುದು. |
| ಆ) | ಜಿಲ್ಲಾವಾರು ಯಾವ ರೀತಿಯ ಸಮಸ್ಯೆಗಳನ್ನು ನಿರ್ಧಿಷ್ಟವಾಗಿ ಮತ್ತು ನಿಶ್ಚಿತವಾಗಿ ಸರಿಪಡಿಸಲಾಗಿದೆ: (ವಿವರ ಒದಗಿಸುವುದು) | ಸಾಮಾಜಿಕ ಭದ್ರತೆ ಮತ್ತು ಪಿಂಚಣಿ, ರಸ್ತೆ ಒತ್ತುವರಿ ತೆರವು, ಖಾತೆ ವರ್ಗಾವಣೆ, ಕೆರೆ ಕಟ್ಟೆಗಳ ಒತ್ತುವರಿಯಾಗಿರುವ ಮಾಹಿತಿ ಪಡೆದು ತೆರವುಗೊಳಿಸುವುದು ಹಾಗೂ ಇನ್ನಿತರೆ ಸಮಸ್ಯೆಗಳನ್ನು ಸರಿಪಡಿಸಲಾಗಿದೆ. ಗ್ರಾಮಸ್ಥರಿಗೆ ಪಿಂಚಣಿ, ಪಡಿತರ ಚೀಟಿ, ಆಧಾರ್, ಆರೋಗ್ಯ ಇಲಾಖೆ ಮತ್ತು ಚುನಾವಣೆ ಚೀಟಿಗೆ ಸಂಬಂಧಪಟ್ಟಂತಹ ಸಮಸ್ಯೆಗಳನ್ನು ಸ್ಥಳದಲ್ಲಿಯೇ ಇತ್ಯರ್ಥಪಡಿಸಲಾಗಿರುತ್ತದೆ, ಹಾಗೂ ನಿವೇಶನ, ಮನೆಗಳು, ರಸ್ತೆ ಮತ್ತು ಕುಡಿಯುವ ನೀರಿನ ಸಮಸ್ಯೆಗಳ ಬಗ್ಗೆ ಕೂಡಲೇ ಕ್ರಮವಹಿಸಲು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆರವರಿಗೆ ಸೂಚಿಸಲಾಗಿರುತ್ತದೆ. ಮೂಲಭೂತ ಸೌಕರ್ಯಗಳಾದ ಸಾರಿಗೆ, ವಿದ್ಯುತ್, ಅಂಗನವಾಡಿ ಕೇಂದ್ರ, ಶಾಲೆಗಳ ಮೂಲಭೂತ ಸೌಕರ್ಯಕ್ಕೆ |

| | | |
|---|---|---|
| | | ಸಂಬಂಧಿಸಿದ ಸಮಸ್ಯೆಗಳನ್ನು ಸರಿಪಡಿಸಲು ಕ್ರಮ ವಹಿಸಲಾಗುತ್ತಿದೆ. ರೈತರ ಜಮೀನುಗಳ ಪಹಣಿ ತಿದ್ದುಪಡಿ ಹಾಗೂ ಸಾಮಾಜಿಕ ಭದ್ರತೆ ಹಾಗೂ ಇನ್ನಿತರೆ ಪಿಂಚಣಿ ಯೋಜನೆಗಳು, ಆಧಾರ್ ಕಾರ್ಡ್ ನೋಂದಣಿ ಹಾಗೂ ತಿದ್ದುಪಡಿ ಹಾಗೂ ಗ್ರಾಮದ ಮೂಲಭೂತ ಸೌಕರ್ಯಗಳು ಮತ್ತು ಗ್ರಾಮಕ್ಕೆ ಸ್ಮಶಾನ ಜಾಗವನ್ನು ನೀಡುವ ಬಗ್ಗೆ ಆಶ್ರಯ ಯೋಜನೆ, ಪೋಡಿಮುಕ್ತ ಗ್ರಾಮ ಹಾಗೂ ಇನ್ನಿತರೆ ಸಮಸ್ಯೆಗಳನ್ನು ಸರಿಪಡಿಸಲಾಗುವುದು. ಅತೀವೃಷ್ಟಿ/ ಬರಪರಿಹಾರ ಪಾವತಿ, ಬಿಪಿಎಲ್ ಕಾರ್ಡ್ ವಿತರಣೆ, ಆಧಾರ್ ಕಾರ್ಡ್, ಎಪಿಕ್ ಕಾರ್ಡ್ ತಿದ್ದುಪಡಿ ಕುರಿತಂತೆ ಸಾರ್ವಜನಿಕರಿಂದ ಸ್ವೀಕೃತವಾದ ಅರ್ಜಿಗಳಲ್ಲಿ ಕ್ರಮವಹಿಸಲಾಗಿದೆ. ಪಿಂಚಣಿಗಳಿಂದ ವಂಚಿತರಾಗಿರುವ ಅರ್ಹ ಫಲಾನುಭವಿಗಳನ್ನು ಗುರುತಿಸಿ ಸೌಲಭ್ಯ ಒದಗಿಸಲು ಸಹಕಾರಿಯಾಗಿದೆ. |
| ಇ) | ಪ್ರಮುಖವಾಗಿ ಗ್ರಾಮೀಣ ಜನತೆಯ ಸಮಸ್ಯೆಗಳೇನು: ಇವುಗಳನ್ನು ಬಗೆಹರಿಸಲು ಸರ್ಕಾರ ಯಾವ ರೀತಿಯ ಕ್ರಮಗಳನ್ನು ಕೈಗೊಂಡಿದೆ. | ಗ್ರಾಮ ವಾಸ್ತವ್ಯದಲ್ಲಿ ವಿವಿಧ ಪಿಂಚಣಿ, ಪಹಣಿ ತಿದ್ದುಪಡಿ, ಆಧಾರ್ ಕಾರ್ಡ್ ತಿದ್ದುಪಡಿ, ಎಪಿಕ್ ಕಾರ್ಡ್ ತಿದ್ದುಪಡಿ, 94ಸಿಸಿ, ಪೌತಿ ಖಾತೆ ಹಾಗೂ ಇನ್ನಿತರೆ ವಿಷಯಗಳಿಗೆ ಸಂಬಂಧಿಸಿದ ಅರ್ಜಿಗಳನ್ನು ಹಾಗೂ ಸಭೆಯಲ್ಲಿ ನೀಡಲಾದ ಇತರೆ ಅರ್ಜಿಗಳನ್ನು ಪಡೆದು ಸ್ಥಳದಲ್ಲೇ ಕಾನೂನು ರೀತ್ಯಾ ಕ್ರಮ ವಹಿಸಲಾಗುತ್ತಿದೆ, ಇತರೆ ಇಲಾಖೆಗೆ ಸಂಬಂಧಿಸಿದ ಇಲಾಖಾ ಅಧಿಕಾರಿಗಳು ಹಾಜರಿದ್ದು, ಗ್ರಾಮಸ್ಥರ ಕುಂದು ಕೊರತೆಗಳನ್ನು ನಿವಾರಿಸುವ ಬಗ್ಗೆ ಕ್ರಮ ಕೈಗೊಳ್ಳುತ್ತಿರುತ್ತಾರೆ. ನಿವೇಶನ ರಹಿತರಿಗೆ ಜಮೀನು ಮಂಜೂರು ಮಾಡುವ ಬಗ್ಗೆ, ಸ್ಮಶಾನಕ್ಕೆ ಜಮೀನು ಮಂಜೂರು ಮಾಡುವ ಬಗ್ಗೆ, ಕುಡಿಯುವ ನೀರಿನ ಸಮಸ್ಯೆಯ ಬಗ್ಗೆ, ಪಡಿತರ ಚೀಟಿ ಬಗ್ಗೆ ಹಾಗೂ ವಿವಿಧ ರೀತಿಯ ಮಾಸಾಶನಗಳನ್ನು ಸ್ಥಳದಲ್ಲಿಯೇ ಪರಿಹಾರ ಒದಗಿಸಿ ಸ್ಥಳದಲ್ಲಿಯೇ ಮಂಜೂರಾತಿ ಪತ್ರಗಳನ್ನು ನೀಡಲಾಗುತ್ತದೆ. ಗ್ರಾಮಸ್ಥರಿಗೆ ನಿವೇಶನ, ಮನೆಗಳು, ರಸ್ತೆ ಮತ್ತು ಕುಡಿಯುವ ನೀರಿನ ಸಮಸ್ಯೆ ಇರುವುದು ಕಂಡುಬಂದಿರುತ್ತದೆ. ಅಂತಹ ಮನವಿಗಳ ಬಗ್ಗೆ ಕೂಡಲೇ ಕ್ರಮವಹಿಸಲು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆರವರಿಗೆ ಸೂಚಿಸಲಾಗಿರುತ್ತದೆ. ಕಂದಾಯ ಇಲಾಖೆ ವ್ಯಾಪ್ತಿಯಲ್ಲಿ ಬರುವ ಸಾಮಾಜಿಕ ಭದ್ರತಾ ಯೋಜನೆಗಳು, ಪಹಣಿ ತಿದ್ದುಪಡಿ, ಬೆಳೆ ಸಮೀಕ್ಷೆ, ಬರ ಪರಿಹಾರದಡಿ ಪರಿಹಾರವನ್ನು ನೀಡಲು ಪರಿಶೀಲಿಸಿ ಕಾನೂನಾತ್ಮಕ ತೊಡಕುಗಳನ್ನು ಬಗೆಹರಿಸಲಾಗುವುದು. |

**ಸಂಖ್ಯೆ:ಕಂಇ 9 ವಿಮಕ 2021**

**(ಆರ್. ಅಶೋಕ)**
**ಕಂದಾಯ ಸಚಿವರು**